ಶ್ರೀ ಹನುಮನಾಯಕ್*

# ಚಲುವನಹಳ್ಳಿಯ ಎರಡು ಅಪ್ರಕಟಿತ ಶಾಸನಗಳು

ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೋಕು, ಬಾಣಾವರ ಹೋಬಳಿ, ಚಲುವನಹಳ್ಳಿ ಗ್ರಾಮದ ಪ್ರಾಥಮಿಕ ಪಾಠಶಾಲೆಯ ಕಾಂಪೌಂಡಿಗೆ ಒಂದು ಶಾಸನದ ಕಲ್ಲನ್ನು ಬುಡಮೇಲಾಗಿ ನಿಲ್ಲಿಸಲಾಗಿದೆ.

ಈ ಶಿಲ್ಪರಹಿತ ವೀರಗಲ್ಲಿನಲ್ಲಿ ಒಟ್ಟು ೧೦ ಸಾಲುಗಳಿದ್ದು ಹತ್ತನೆಯ ಸಾಲಿನಲ್ಲಿ ಕೆಲವು ಅಕ್ಷರಗಳು ಅರೆ ಬರೆಯಾಗಿ ಕಾಣಿಸುತ್ತವೆ. ಶಾಸನ ಒಡೆದಿರುವುದರಿಂದ ಇದು ಅಪೂರ್ಣವಾಗಿದೆ.

ಶಾಸನವು ಸುಮಾರು ೨.೯" ಎತ್ತರ ೨.೬" ಅಗಲ ಮತ್ತು ೪ ಅಂಗುಲ ದಪ್ಪ ಇದ್ದು ಸ್ಥಳೀಯವಾಗಿ ದೊರೆಯುವ ಗಟ್ಟಿ ಗ್ರಾನೈಟ್ ಕಲ್ಲಿನ ಮೇಲೆ ಕೆತ್ತಲಾಗಿದೆ. ಇದರ ಭಾಷೆ ಕನ್ನಡವಾಗಿದ್ದು, ಲಿಪಿ ೯-೧೦ನೆಯ ಶತಮಾನಕ್ಕೆ ಸೇರಿದುದಾಗಿದೆ.

**ಶಾಸನದ ಪಾಠ**

೧ ಸ್ವತಿ[ಸ್ತಿ] ಶ್ರೀ ಪೆರ್ಮ್ಮನಡಿ ರ ಜ್ಯಂಗೆಯ್ಯೆ
೨ ಉಮ್ಮದರಸನದ ಅತಿರಥ ಮಂಗ
೩ ಲದಟಭೋರ ಗೋವರ್ಧನ ಕ್ರ
೪ ಮಯಿತಸು ಶ್ರೀಧರನ ಮಮ್ಮ
೫ ತಿಬ್ಬ ಮ್ಮಾಣಿಯನ್ನೊಳಮ್ಬನ
೬ ದಮರ
೭ ಗೋಗ್ರಹಣಮು ಕೇಶಗ್ರಹ
೮ ಣದುಳ್ ಬಿದ್ಧ ವಿಮೆನ
೯ ಲೆ ವಿಷ್ಣು ಲೋಕದೊಳ್ ಪೋ
೧೦ * * * *

**ಶಾಸನದ ಸಾರಾಂಶ**

ಈ ಶಾಸನದ ಲಿಪಿ ಮತ್ತು ಭಾಷೆ ಅಲ್ಲಲ್ಲಿ ಅಸ್ಪಷ್ಟವಿದ್ದು ಇದನ್ನು ಅರ್ಥೈಸುವುದು ಕಷ್ಟವಾಗಿದೆ. ಇದರ ತಾತ್ಪರ್ಯವನ್ನು ಹೀಗೆ ಗ್ರಹಿಸಬಹುದು.

"ಪೆರ್ಮಾನಡಿ ಎಂಬ ದೊರೆ ರಾಜ್ಯವಾಳುತ್ತಿರುವಾಗ ಅತಿರಥ ಮಂಗಲವೆಂಬ ಸ್ಥಳದ ಗೋವರ್ಧನ ಕ್ರಮಯಿತ ಎಂಬ ಬ್ರಾಹ್ಮಣನ ಸಂಬಂಧದ ತಿಬ್ಬಮ್ಮಾಣಿ ಎಂಬುವನು ನೊಳಂಬರ ಕಡೆಯವರು ಗೋವುಗಳನ್ನು ಹಿಡಿಯಲು ಮತ್ತು ಆ ಗ್ರಾಮದ ಸ್ತ್ರೀಯರ ಜಡೆಮುಡಿಗಳನ್ನು ಹಿಡಿಯಲು ಹೋದಾಗ, ಅದನ್ನು ನೋಡಿ ಕೆರಳಿ, ಆ ಗೋವುಗಳನ್ನು ಬಿಡಿಸುವಲ್ಲಿ ಮತ್ತು ಆ ಸ್ತ್ರೀಯರಿಗಾದ ಅವಮಾನವನ್ನು ತಡೆಯುವಲ್ಲಿ ಯಶಸ್ವಿಯಾಗಿ ಹೋರಾಡಿ ಸತ್ತನು. ಹೀಗೆ ಸತ್ತ ವೀರನು ಮಾನವೇರಿ ಶ್ರೀ ವಿಷ್ಣುಲೋಕಕ್ಕೆ ಹೋದನು."

* ನಂ. ೧೭೬/೩, ೧ನೆಯ ಮುಖ್ಯ ರಸ್ತೆ, ೨ನೆಯ ಅಡ್ಡ ರಸ್ತೆ, ಬೋವಿಪಾಳ್ಯ
ಮಹಾಲಕ್ಷ್ಮಿಪುರಂ, ಬೆಂಗಳೂರು-೫೬೦ ೦೮೬.

ಸ್ವಸ್ತಿಶ್ರೀ ಪೆರ್ಮ್ಮಾನಡಿ ಎಂದು ಪ್ರಾರಂಭವಾಗುವ ಈ ಶಾಸನವು ಪೆರ್ಮ್ಮಾನಡಿ ಯಾರು ಎಂದು ತಿಳಿಸಿಲ್ಲ. ಈ ಶಾಸನ ದೊರೆತ ಸ್ಥಳದ ನೆರೆಹೊರೆಯ ಗ್ರಾಮಗಳಾದ ಅರಕೆರೆ, ಕಣಿಕಟ್ಟೆ ಮತ್ತು ನೇರಲಿಗೆ ಶಾಸನಗಳಲ್ಲಿಯೂ ಪೆರ್ಮ್ಮಾನಡಿಯ ಉಲ್ಲೇಖ ಬರುತ್ತದೆ. ಕ್ರಿ.ಶ. ೮೯೦ರ ಅರಕೆರೆಯ ಶಾಸನದಲ್ಲಿ ಸತ್ಯವಾಕ್ಯ ಪೆರ್ಮ್ಮಾನಡಿ ಎಂಬ ಬಿರುದು ಎರಡನೇ ರಾಚಮಲ್ಲನಿಗೆ ಇತ್ತೆಂದು ತಿಳಿಸುತ್ತದೆ. ಕ್ರಿ.ಶ. ೮೯೪ರ ನೇರಳಿಗೆ ಶಾಸನವು ಪೆರ್ಮ್ಮಾನಡಿಯು ಎರೆಯಪ್ಪರಸನೆಂದು ತಿಳಿಸುತ್ತದೆ. ೨ನೇ ರಾಚಮಲ್ಲ ಮತ್ತು ಎಲೆಯಪ್ಪರಸನು ಸು. ೩೦ ವರ್ಷಗಳ ಕಾಲ (೮೮೬–೯೧೯) ಒಟ್ಟೊಟ್ಟಿಗೆ ರಾಜ್ಯಭಾರ ಮಾಡಿದರು. ಆದ್ದರಿಂದ ಪ್ರಸ್ತುತ ಶಾಸನದ ಪೆರ್ಮ್ಮಾನಡಿಯನ್ನು ಎರಡನೆಯ ರಾಚಮಲ್ಲನೆಂದು ಗುರುತಿಸಬಹುದಾಗಿದೆ. ಇದರ ಕಾಲವನ್ನು ಸು. ಕ್ರಿ.ಶ. ೮೯೨ರ ಕಾಲಕ್ಕೆ ಸೇರಿದ್ದೆಂದು ಊಹಿಸಬಹುದು.

ಗೋಗ್ರಹಣ ಮತ್ತು ಕೇಶಗ್ರಹಣ ನಡೆದದ್ದು ಅತಿರಥ ಮಂಗಲದಲ್ಲಿ. ಆದರೆ ಈ ಹೆಸರಿನ ಗ್ರಾಮಗಳು ಶಾಸನವಿರುವ ಪ್ರದೇಶದಲ್ಲಿ ಎಲ್ಲಿಯೂ ಇಲ್ಲ. ಈ ಪ್ರದೇಶದಲ್ಲಿ ಗಂಗರಿಗೂ ಮತ್ತು ಅವರ ಶತ್ರುಗಳಾದ ನೊಳಂಬರಿಗೂ ಅನೇಕ ಸಲ ಯುದ್ಧ ನಡೆದ ಸಂಗತಿ ಶಾಸನಗಳಿಂದ ತಿಳಿದು ಬರುತ್ತದೆ. ಅದರಲ್ಲೊ ೨ನೇ ರಾಚಮಲ್ಲನ ಕಾಲದಲ್ಲಿ ಗಂಗರು ಸತತವಾಗಿ ನೊಳಂಬರೊಡನೆ, ಬಾಣರೊಡನೆ ಮತ್ತು ವೈದುಂಬರೊಡನೆ ಯುದ್ಧಗಳನ್ನು ಮಾಡಿದ್ದುಂಟು.

ಈ ಶಾಸನದಲ್ಲಿ 'ಗೋಗ್ರಹಣ'ದ ಜೊತೆಗೆ 'ಕೇಶಗ್ರಹಣ'ದ ಉಲ್ಲೇಖವಿದ್ದು ಇದೊಂದು ಅಪರೂಪದ ಪ್ರಯೋಗವಾಗಿದೆ. ಕೇಶಗ್ರಹಣವೆಂದರೆ ತಲೆಯ ಕೂದಲನ್ನು ಹಿಡಿದಿದ್ದು ಅಥವಾ ಕತ್ತರಿಸಿದ್ದು ಎಂಬರ್ಥ ನೀಡಬಹುದು. ಬಹುಶಃ ಪೆಣ್ಬುಯ್ಯಲ್ ಪದಕ್ಕೆ ಸಮಾನ ಅರ್ಥದಲ್ಲಿ ಇದನ್ನು ಬಳಸಿದ್ದಲ್ಲಿ ಸ್ತ್ರೀಯರ ಮುಡಿಯನ್ನು ಹಿಡಿದು ಕತ್ತರಿಸಿದ ಅರ್ಥವನ್ನು ನೀಡಬಹುದಾಗಿದೆ. ಶಾಸನ ರಚಕ ತುರುಗಾಳೆಗ, ಪೆಣ್ಬುಯ್ಯಲ್ ಪದಗಳಿಗೆ ಸಂಸ್ಕೃತ ಪದಗಳಾದ ಗ್ರೋಗ್ರಹಣ, ಕೇಶಗ್ರಹಣ ಎಂಬ ಪದಗಳನ್ನು ಬಳಸಿರುತ್ತಾನೆ.

ಶಾಸನದಲ್ಲಿ ಉಲ್ಲೇಖಿಸಲ್ಪಟ್ಟಿರುವ ಗೋವರ್ಧನ ಶ್ರೀಧರ, ಅತಿರಥಮಂಗಲ ಮತ್ತು ವಿಷ್ಣುಲೋಕ, ಮೊದಲಾದ ಶಬ್ದಗಳನ್ನು ಗಮನಿಸಿದಾಗ ವಿಷ್ಣು ಪಾರಮ್ಯವನ್ನು ಸೂಚಿಸುತ್ತದೆ. ಸಂಸ್ಕೃತ ಪದಗಳನ್ನು ಸಹ ಈ ಶಾಸನದಲ್ಲಿ ಹೆಚ್ಚಿಗೆ ಬಳಸಿರುತ್ತಾರೆ.

ಇನ್ನೊಂದು ಶಾಸನವು ಇದೇ ಗ್ರಾಮದ ಪೂರ್ವ ದಿಕ್ಕಿನಲ್ಲಿರುವ ಈಶ್ವರ ದೇವಸ್ಥಾನದ ನವರಂಗದ ದಕ್ಷಿಣ ಭಾಗದಲ್ಲಿ ಶಿಲ್ಪವನ್ನೊಳಗೊಂಡಿದ್ದು, ಸುಮಾರು ೧.೩ ಅಡಿ ಎತ್ತರ ೧.೧ ಅಡಿ ಅಗಲ ಮತ್ತು ೩ ಇಂಚು ದಪ್ಪ ಸೈಜಿನ ಬಳಪದ ಕಲ್ಲಿನಲ್ಲಿ ಕೆತ್ತಲಾಗಿದೆ. ಇದರಲ್ಲಿ ಒಟ್ಟು ೫ ಸಾಲುಗಳಿವೆ.

ಶಾಸನದ ಮೇಲ್ಭಾಗದ ಶಿಲ್ಪದಲ್ಲಿ ಬಲಭಾಗದಲ್ಲಿ ಒಬ್ಬ ವ್ಯಕ್ತಿ ಮೊಣಕಾಲೂರಿ ಲಿಂಗಕ್ಕೆ ಕೈ ಮುಗಿಯುತ್ತಿರುವಂತೆಯೂ ಲಿಂಗದ ಇನ್ನೊಂದೆಡೆಯಲ್ಲಿ ಖಡ್ಗ ಮತ್ತು ಹಸುವಿನ ಚಿತ್ರಗಳನ್ನು ಬಿಡಿಸಲಾಗಿದೆ. ಈ ಶಿಲ್ಪಗಳ ಆಧಾರದಿಂದ ಇದೊಂದು ದಾನಶಾಸನವೆಂದು ಹೇಳಬಹುದು.

**ಶಾಸನದ ಪಾಠ**

೧ ಸುಭಾನು ಸಂವತ್ಸರದ ವೈಶಾಖ

೨ ಬಹುಳ ೩ ಬೃಹವಾರದಂದು ಚಂ

೩ ದೊರನ ಹಕಿಯ[೧] ಕೈಯಾಣ ೧ ಕಂ ಗಾ

೪ ಣದೆರೆ ವಸುಧೆ ೨ ಕಾಚೆಯನಾಯ

೫ ಕ ಬಿಠ [ಟ್ಟ] ಧರ್ಮ.

ಈ ಶಾಸನವನ್ನು ಲಿಪಿಯ ಲಕ್ಷಣಗಳಿಂದ ಹೊಯ್ಸಳರ ಕಾಲಕ್ಕೆ ಸೇರಿಸಬಹುದು. ಶಾಸನದಲ್ಲಿ ಎಲ್ಲಿಯೂ ಕಾಲವನ್ನು ನಿಖರವಾಗಿ ತಿಳಿಸದೆ ಸುಭಾನು ಸಂವತ್ಸರದ ವೈಶಾಖ ಬಹುಳ ಎಂದು ಮಾತ್ರ ಉಲ್ಲೇಖಿಸಿದೆ. ಇದು ಸ್ವಾಮಿ ಕಣ್ಣು ಪಿಳ್ಳೆಯವರ ಇಂಡಿಯನ್ ಎಫಿಮರೀಸ್‌ನ ಪ್ರಕಾರ ೨೨ನೇ ಗುರುವಾರ ಏಪ್ರಿಲ್ ೧೨೮೩ಕ್ಕೆ ಸರಿಹೊಂದುತ್ತದೆ.

ಸುಭಾನು ಸಂವತ್ಸರದ ವೈಶಾಖ ಮಾಸದ ಗುರುವಾರದಂದು ಕಾಖೆಯನಾಯಕ ಎಂಬುವವನು ಒಂದು ಕೈಯ್ಯಾಗಣವನ್ನು ಮತ್ತು ಅದರಿಂದ ಬರುವ ತೆರಿಗೆ ಹಾಗೂ ೨ ಎಕರೆ ಭೂಮಿಯನ್ನು ಈ ದೇವ ಸ್ಥಾನಕ್ಕೆ ದತ್ತಿಯಾಗಿ ಬಿಟ್ಟನು.

ಇವೆರಡೂ ಶಾಸನಗಳಿಂದ ನಮಗೆ ತಿಳಿದು ಬರುವುದೇನೆಂದರೆ ಇಂದಿನ ಚಲುವನಹಳ್ಳಿ ಗ್ರಾಮವು ಅತಿ ಪುರಾತನ ಗ್ರಾಮವಾಗಿದ್ದು ರಾಜಕೀಯ ಮತ್ತು ಸಾಂಸ್ಕೃತಿಕ ಕೇಂದ್ರವಾಗಿತ್ತೆಂದು ಭಾವಿಸಬಹುದು.

## ಆಧಾರಿತ ಗ್ರಂಥಗಳು


೧ ಮೈಸೂರು ಆರ್ಕಿಯಾಲಾಜಿಕಲ್ ಸರ್ವೆ. ಎ.ಕ.ಸಂ. ೧೫. ಸಪ್ಲಿಮೆಂಟರಿ ಇನ್ಸ್‌ಕ್ರಿಪ್ಷನ್ಸ್. ಡಾ॥ ಎಂ.ಎಚ್. ಕೃಷ್ಣ

೨ ಎಂ.ಎ. ಆರ್ : ೧೯೦೬-೧೯೨೨

೩ ಡಾ॥ ಪಿ.ಬಿ. ದೇಸಾಯಿ : ಹಿಸ್ಟರಿ ಆಫ್ ಕರ್ನಾಟಕ : ಧಾರವಾಡ ಕನ್ನಡ ರೀಸರ್ಚ್ ಇನ್ಸ್‌ಟಿಟ್ಯೂಟ್, ಕರ್ನಾಟಕ ವಿಶ್ವವಿದ್ಯಾಲಯ ; ೧೯೭೦.



ಈ ಶಾಸನದ ಪಾಠ ಸಿದ್ಧಪಡಿಸುವಲ್ಲಿ ಮತ್ತು ಅರ್ಥೈಸುವಲ್ಲಿ ಮಾರ್ಗದರ್ಶನ ನೀಡಿದ ನನ್ನ ಗುರುಗಳಾದ ಶ್ರೀ. ಕೆ. ಆರ್. ಗಣೇಶ್, ಶ್ರೀ ದೇವರಕೊಂಡಾರೆಡ್ಡಿ ಮತ್ತು ಬಿ. ರಾಜಶೇಖರಪ್ಪ ಇವರುಗಳಿಗೆ ನಾನು ಋಣಿಯಾಗಿದ್ದೇನೆ.